# ಕರ್ನಾಟಕ ವಿಧಾನ ಪರಿಷತ್

ಸದಸ್ಯರ ಹೆಸರು : ಶ್ರೀಮತಿ ವೀಣಾ ಅಚ್ಚಯ್ಯ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 512

ಉತ್ತರಿಸುವ ದಿನಾಂಕ : 24.09.2020

ಉತ್ತರಿಸಬೇಕಾದ ಸಚಿವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಶಾಸಕರು, ವಿಧಾನ ಪರಿಷತ್ ಸದಸ್ಯರ ಆಪ್ತ ಸಹಾಯಕರಾಗಿ ಜಿಲ್ಲಾಧಿಕಾರಿಗಳ ಕಛೇರಿ ಮೂಲಕ ನೇಮಕಗೊಂಡು, ಗುತ್ತಿಗೆ ಆಧಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರಿಗೆ ಆಗಸ್ಟ್-2020ರ ಮಾಹೆವರೆಗಿನ ವೇತನ ಪಾವತಿ ಆಗಿದೆಯೇ; | ರಾಜ್ಯದಲ್ಲಿ ಶಾಸಕರು, ವಿಧಾನ ಪರಿಷತ್ ಸದಸ್ಯರ ಆಪ್ತ ಸಹಾಯಕರಾಗಿ ಜಿಲ್ಲಾಧಿಕಾರಿಗಳ ಕಛೇರಿ ಮೂಲಕ ನೇಮಕಗೊಂಡು, ಗುತ್ತಿಗೆ ಆಧಾರದ, ಮೇರೆಗೆ ಬೆಂಗಳೂರು ನಗರ, ರಾಮನಗರ, ಕೋಲಾರ, ದಾವಣಗೆರೆ, ಚಿಕ್ಕ ಮಗಳೂರು, ಹಾಸನ, ಕೊಡಗು, ಗದಗ, ವಿಜಯಪುರ, ಧಾರವಾಡ, ಹಾವೇರಿ, ಚಿಕ್ಕಬಳ್ಳಾಪುರ, ತುಮಕೂರು, ಶಿವಮೊಗ್ಗ ಮತ್ತು ಮೈಸೂರು ಜಿಲ್ಲೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರಿಗೆ ಆಗಸ್ಟ್-2020ರ ಮಾಹೆಯವರೆಗೂ ವೇತನ ಪಾವತಿ ಮಾಡಲಾಗಿರುತ್ತದೆ. ಬೆಳಗಾವಿ, ಬಳ್ಳಾರಿ ಮತ್ತು ಯಾದಗಿರಿ, ಈ ಜಿಲ್ಲೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರಿಗೆ ಜುಲೈ-2020ರ ಮಾಹೆಯವರೆಗೂ ವೇತನ ಪಾವತಿ ಮಾಡಲಾಗಿರುತ್ತದೆ.<br>ಮಂಡ್ಯ, ಚಾಮರಾಜನಗರ, ರಾಯಚೂರು ಮತ್ತು ಬೀದರ್ ಜಿಲ್ಲೆಗಳಲ್ಲಿ ಯಾವುದೇ ಆಪ್ತ ಸಹಾಯಕರನ್ನು ಗುತ್ತಿಗೆ ಆಧಾರದಲ್ಲಿ ನೇಮಿಸಿರುವುದಿಲ್ಲ.<br>ಆಪ್ತ ಸಹಾಯಕರ ವೇತನ ಮತ್ತು ಬಾಕಿ ಇರುವ ವೇತನ ಪಾವತಿಗೆ ಜಿಲ್ಲಾಧಿಕಾರಿಗಳಿಂದ ಸಲ್ಲಿಕೆಯಾಗಿರುವ ಪ್ರಸ್ತಾವನೆಗಳಿಗೆ ಅನುಗುಣವಾಗಿ ಅಕ್ಟೋಬರ್-2020ರವರೆಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಅನುದಾನ ಬಿಡುಗಡೆ ಮಾಡಲಾಗಿದ್ದು, ಆಯಾಯ ಜಿಲ್ಲಾಧಿಕಾರಿಗಳು ವೇತನ ಪಾವತಿಸಲು ಕ್ರಮವಹಿಸುತ್ತಿದ್ದಾರೆ. |
| ಆ) | ಆಗದಿದ್ದಲ್ಲಿ, ಎಷ್ಟು ತಿಂಗಳ ವೇತನ ಬಾಕಿಯಿದೇ (ಸಂಪೂರ್ಣ ಮಾಹಿತಿ ನೀಡುವುದು) | |

| | | |
|---|---|---|
| ಇ) | ಈ ರೀತಿ ಸಕಾಲದಲ್ಲಿ ವೇತನ ಪಾವತಿಯಾಗದೆ ಅನಗತ್ಯ ವಿಳಂಬವಾಗಲು ಕಾರಣಗಳೇನು; | 2019-20ನೇ ಸಾಲಿನವರೆಗೂ ಕಂದಾಯ ಇಲಾಖೆಯಿಂದ ಅನುದಾನ ಬಿಡುಗಡೆಯಾಗುತ್ತಿದ್ದು, 2020-21ನೇ ಸಾಲಿನಿಂದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ವೇತನ ಪಾವತಿಗಾಗಿ ಅನುದಾನ ಬಿಡುಗಡೆ ಮಾಡುತ್ತಿದೆ.<br><br>ಆಯಾಯ ಜಿಲ್ಲೆಗಳಿಂದ ಇದುವರೆವಿಗೂ ಸ್ವೀಕರಿಸಿರುವ ಆಪ್ತ ಸಹಾಯಕರ ಮಾಹಿತಿ (ಹುದ್ದೆಯ ವರ್ಗ, ವೇತನ ಮತ್ತು ಸಂಖ್ಯೆ) ಯ ಪ್ರಸ್ತಾವನೆಗನುಗುಣವಾಗಿ ಆರ್ಥಿಕ ಇಲಾಖೆಯ ಆದೇಶಾನುಸಾರ ಅಕ್ಟೋಬರ್-2020ರ ವರೆಗೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br><br>ಮುಂದುವರೆದು, 2017-18ನೇ ಸಾಲಿನಿಂದ 2019-20ನೇ ಸಾಲಿನವರೆಗೂ ಬಾಕಿ ಇದ್ದ ವೇತನವನ್ನು ಸಹ ಪಾವತಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಈಗಾಗಲೇ ಅನುದಾನ ಬಿಡುಗಡೆ ಮಾಡಲಾಗಿದೆ. ಇದರ ಅನುಸಾರ, ಆಯಾ ಜಿಲ್ಲೆಗಳಿಂದ ಕೆ- |
| ಈ) | ಬಾಕಿ ಇರುವ ಸಂಪೂರ್ಣ ವೇತನವನ್ನು ಯಾವ ಕಾಲಮಿತಿಯೊಳಗೆ ಇವರಿಗೆ ಪಾವತಿಸಲಾಗುವುದು? | 2 ತಂತ್ರಾಂಶದ ಮೂಲಕ ಆಪ್ತ ಸಹಾಯಕರಿಗೆ ವೇತನ ಪಾವತಿ ಮಾಡಲು ಜಿಲ್ಲಾಧಿಕಾರಿಗಳಿಂದ ಪ್ರಸ್ತುತ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: DPAR 30 ALA 2020

(ಬಿ.ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿ